ಎಂ. ವಾಯ್. ಸಾವಂತ

# ಧಾರವಾಡದ ಬಗ್ಗೆ ಒಂದು ತಾಳೇಬಂದ (ಇ. ಸ. ೧೭೬೭)

ಕ್ರಿಸ್ತಶಕ ೧೭೫೩ ರಿಂದ ೧೮೧೮ರವರೆಗೆ ಸುಮಾರು ೬೫ ವರ್ಷಗಳ ಕಾಲ ಧಾರವಾಡವು ಪೇಶ್ವೆಯವರ ಆಡಳಿತಕ್ಕೆ ಒಳಪಟ್ಟಿತ್ತು. ಪೇಶ್ವೆಯರ ಕಾಲದ ಧಾರವಾಡದ ರೆವಿನ್ಯೂ ಆಡಳಿತವನ್ನು ವಿವರಿಸುವಂತಹ ಅನೇಕ ತಾಳೇಬಂದಗಳು ಪುಣೆಯ ದಫ್ತರಖಾನೆ ಅಥವಾ ಪತ್ರಾಗಾರದಲ್ಲಿ ಸಂಗ್ರಹಿಸಿಡಲಾಗಿದೆ.* ಅವು ಮೋಡೀಭಾಷೆಯಲ್ಲಿ ಇವೆ.

ತಾಳೇಬಂದ ಇದರ ಅರ್ಥ ಜಮಾಖರ್ಚಿನ ವಿವರ ಅಥವಾ ಆಯವ್ಯಯದ ಪಟ್ಟಿ. ಆಗಿನ ಕಾಲದಲ್ಲಿ ವಾರ್ಷಿಕ ಜಮಾಖರ್ಚನ್ನು ಹ್ಯಾಗೆ ಇಡುತ್ತಿದ್ದರು ಎಂಬುದು ನಮಗೆ ಗೊತ್ತಾಗುತ್ತದೆ. ಅಲ್ಲದೆ ಹೊಸ ಹೊಸ ರೆವಿನ್ಯೂ ಶಬ್ದಗಳ ಬಳಕೆಯನ್ನು ನಾವು ಗಮನಿಸಬಹುದು. ಅಂತಹ ಒಂದು ತಾಳೇಬಂದವನ್ನು ಇಲ್ಲಿ ವಿವರಿಸಲಾಗಿದೆ. ಅದರ ಪ್ರಾರಂಭ ಹೀಗಿದೆ : "ತಾಳೇಬಂದ ಪರಗಣಾ ಧಾರವಾಡ ನಿಸಬತ್ ರಾಜಶ್ರೀ ವೆಂಕಟರಾವ್ ನಾರಾಯಣ ಮಾರಫತ್ ಉಡಪೀ ನರಸೀ ಸು. ಸನ್ ಸಬಾ ಸಿತ್ತೈನ ಮಯಾ ವ ಅಲಫ್." ಈ ತಾಳೇಬಂದದ ಪ್ರಕಾರ ಕ್ರಿ.ಶ. ೧೭೬೭ರಲ್ಲಿ ಪೇಶ್ವೆಯರ ಪರವಾಗಿ ಇಚ್ಚಲಕರಂಜಿಯ ರಾಜಶ್ರೀ ವೆಂಕಟರಾವ ನಾರಾಯಣ ಇವರು ಆಡಳಿತ ನಡೆಸುತ್ತಿದ್ದರು. ಮತ್ತು ಅವರು ಉಡಪೀ ನರಸಿಂಹರಾವ ಇವರನ್ನು ಧಾರವಾಡದ ಕಮಾವಿಸದಾರ ಎಂದು ನೇಮಿಸಿದ್ದರು.

ಈ ವರ್ಷದ, ಅಂದರೆ ೧೭೬೭ರ ಜಮಾಖರ್ಚಿನ ವಿವರ ಹೀಗಿದೆ :

| | ರೂ.ಆ.ಪೈಸೆ |
|---|---|
| ಹಿಂದಿನ ವರ್ಷದ ಬಾಕಿ (ಬಾಕಿ ಸಾಲ ಗುದಸ್ತ) | ೨,೮೧೬–೯–೨ |
| ಚಾಲತೀ ವರ್ಷದ ಉತ್ಪನ್ನ (ಜಮಾ ಸಾಲ ಮಜಕೂರ) | ೫೧,೪೪೭–೨–೦ |
| ಒಟ್ಟು ಜಮಾ ರಕಂ | ೫೪,೨೬೩–೧೧–೨ |

| | |
|---|---|
| ಹಿಂದಿನ ವರ್ಷದ ಬಾಕಿಯ ತಪಶೀಲು ಮಜಮು ಬಾಕಿ (ಭೂಕಂದಾಯ ಉಳಿದದ್ದು) | ೨,೦೩೦–೧೪–೦ |
| ಗಾವಗಾನಾ ಬಾಕಿ (ಗ್ರಾಮಗಳಿಂದ ಬರತಕ್ಕದ್ದು) | ೭೮೫–೧೧–೬ |
| ಒಟ್ಟು | ೨,೮೧೬– ೯–೬ |

ಚಾಲತೀ ವರ್ಷದ ಜಮಾ ಈ ಕೆಳಗಿನಂತೆ ಇದೆ :

| | |
|---|---|
| ೪೮,೮೬೫–೧೪–೦ | ಮುಲಕಿ ಜಮಾ |
| ೨,೫೮೧– ೪–೦ | ಇಜಾಫತ್ ಮತ್ತು ಅಂತಸ್ತ |
| ಒಟ್ಟು ೫೧,೪೪೭– ೨–೦ | |

* ಪುಣೆಯ ಪತ್ರಾಗಾರ, ಕರ್ನಾಟಕ ಜಮಾವ ರುಮಾಲ ಸಂ. ೪೯

ಇದರ ಹೊರತಾಗಿ

೭,೭೭೪-೬-೦ ಸಿವಾಯೆ ಜಮಾ
೧,೦೩೨-೧-೦ ಕಮಾವಿಸಿ ಜಮೆ
೩೩,೧೯೮-೯-೦ ಐನ ಜಮೆ ಅಥವಾ ಮೂಲ ಜಮೆ

ಖರ್ಚಿನ ಬಾಬತ್ತು

೧) ೨೭,೦೫೭-೧೧-೧ ಸುಭಾಗಳಿಗೆ ರಸದ ಮತ್ತು ವರಾತಾ
೨) ೬,೨೯೧-೦೫-೧ ಮಹಾಲ ಮಹಕೂರ ಖರ್ಚು
೩) ೧,೦೨೦- ೦-೦ ಜಮೀನದಾರರ ಹಕೆ ವರ್ತನಾ
೪) ೫,೭೩೩- ೪-೦ ಮೊಕಸಿ
೫) ೬೯೦- ೦-೦ ಮುಂಗಡ ಮೇಲಿನ ಬಡ್ಡಿ
೬) ೫,೯೭೧-೧೨-೦ ಬಟಾ ಸಾಲ ಬಡ್ಡಿ

೪೬,೮೬೪-೧೦-೨ ಒಟ್ಟು

ಬಾಕಿ

೫೪,೨೬೩-೧೧-೨ ಇಡೀ ವರ್ಷದ ಉತ್ಪನ್ನ
೪೬,೮೬೪-೧೦-೨ ವಾರ್ಷಿಕ ಖರ್ಚು

೭,೩೯೯- ೧-೦ ಒಟ್ಟು

ಈ ಬಾಕಿಯ ತಪಶೀಲು

೬,೧೬೩-೧೨-೦ ಮುಹಮು ಬಾಕಿ
೧,೨೩೫- ೫-೦ ಮುಲಕೀ ಬಾಕಿ

೭,೩೯೯- ೧-೦ ಒಟ್ಟು

**ವಿವರ :** ಹಿಂದಿನ ವರ್ಷದ ಬಾಕಿಯಲ್ಲಿ ೨,೦೩೦-೧೪-೦ ಮಜಮು ಬಾಕಿಯು ಕಿಲ್ಲೆ ಬಂಕಾಪುರದ ರಾಮಚಂದ್ರ ನಾರಾಯಣ ಇವರಿಗೆ ಮದ್ದು-ಗುಂಡು ತಯಾರಿಸಲಿಕ್ಕೆ ಗೋವಿಂದ ಭಾಸ್ಕರ ಫಡನೀಸ್ ಇವರಿಗೆ ವೇತನ ಹಾಗೂ ತಲೀಕಾರ ಭಾಪಾ ಇವನನ್ನು ಕಳುವು ಮಾಡುವಾಗ ಹಿಡಿದ ಬಗ್ಗೆ ಬಕ್ಷೀಸ್ ಕೊಡಬೇಕಾದದ್ದು ಇರುತ್ತದೆ. ಮತ್ತು ೭೮೫-೧೧-೬ ಇದು ಜಕಾತ, ಎತ್ತಿನಗುಡ್ಡ, ದೊಡ್ಡನಾಯಕನಕೊಪ್ಪ ಗ್ರಾಮಗಳಿಂದ ಹಾಗೂ ಕೆಲಗೆರೆಯ ಶ್ರೀರಂಗ ಬಾಪು ಕಡೆಯಿಂದ ಬರತಕ್ಕ ಬಾಕಿ ಆಗಿರುತ್ತದೆ.

ಗ್ರಾಮಗಳಿಂದ ಆದ ರದಕರ್ಜ ವಸೂಲು ರಕಂ—

೩೮,೪೯೦-೧೧-೦ ಇಕ್ಕೇರಿ ಹೊನ್ನು
೫,೭೬೨- ೬-೦ ಜುನೇ ಧಾರವಾಡೀ
೦- ೦-೦ ಪುದಿಚೇರಿ

ಇಲ್ಲಿ ಇಕ್ಕೇರಿ ಹೊನ್ನುಗಳನ್ನು ರೂಪಾಯಿಯಲ್ಲಿ ಪರಿವರ್ತಿಸಲಾಗಿದೆ. ದರ ೩-೧೨-೦ ಪ್ರಕಾರ.

೧) ಐನ ಜಮಾ ಅಥವಾ ಮೂಲ ಜಮೆಯ ವಿವರ :

೧೩,೨೮೦-೧೩-೨ ದರೋಬಸ್ತ ಗ್ರಾಮ
೨,೦೬೨- ೮-೦ ಭೀಮರಾವ ನರಸಿಂಗರಾವ ದೇಸಾಯಿ
೩,೫೬೨- ೮-೦ ಕೊನೇರ ಕಾಸಿ ದೇಶಪಾಂಡೆ
೩,೩೭೫- ೦-೦ ಗೋವನಕೊಪ್ಪದ ಸರನಾಡ ಗೌಡಾ
೧೮೭- ೮-೦ ಜೋಗಿ ಯಲ್ಲಾಪೂರದ ದೇವಣಗೌಡಾ ಪಾಟೀಲ
೪,೦೯೩- ೫-೯

ಒಟ್ಟು ೩೩,೧೯೮- ೯-೦

೨) ಸಿವಾಯ ಜಮಾ : ಅಂದರೆ ಅಧಿಕ ಆದಾಯದ ವಿವರ :

ಪರಗಣೆಯ ಇಜಾರದಾರರಾದ ರಾಮಾಜಿ ತಮಾಜಿ ಜಮೀನದಾರರಾದ ದೇಸಾಯಿ, ದೇಶಪಾಂಡೆ, ಸರನಾಡ ಗೌಡಾ ಮತ್ತು ದೇವಣ ಗೌಡಾ ಇವರ ಕಡೆಯಿಂದ ವಸೂಲಿ ಆದದ್ದು ಒಟ್ಟು ೩,೭೦೦-೦೦ ಮಾವಿನ ತೋಪು ಹಾಗೂ ಬಾಗಾಯತಗಳಿಂದ ೬೦-೦-೦. ಮಂಗಳವಾರಪೇಟೆ ಮತ್ತು ಶುಕ್ರವಾರಪೇಟೆಗಳಿಂದ ಬಂದ ಮೊಹರ್ತಫಾ (ಅಂಗಡಿ ಪಟ್ಟಿ) ಒಟ್ಟು ರಕಂ ೭,೭೭೪-೬-೦.

೩) **ಕಮಾವಿಸೀ ಜಮಾ :** ರಕಂ ೧,೦೩೨-೩-೦ ಇದನ್ನು ಈ ಕೆಳಗಿನಂತೆ ವಸೂಲ ಮಾಡಿದ್ದು : ಗಿರಿಯಣ್ಣ ಮತ್ತು ನರಸಣ್ಣ ಉಪ್ಪಾರಿ ಇವರಿಬ್ಬರ ಜಗಳವನ್ನು ಬಗೆಹರಿಸಿ ಗಿರಿಯಣ್ಣನ ಕಡೆಯಿಂದ ವಸೂಲ ಮಾಡಿದ್ದು, ಕಮಲಾಪೂರದ ಹಜಾಮನಿಗೆ (ಮಹಾಲೆ) ಪುರುಷತ್ವ ಇಲ್ಲ ಎಂಬುದರ ಬಗ್ಗೆ ಅವನ ಪತ್ನಿಯ

ದೂರು ಬಂದದ್ದರಿಂದ ವಸೂಲವಾದದ್ದು, ಅದೇ ಊರಿನ ನಾಯಿಂದ ಅಪ್ಪಣ್ಣಾರಾಯಣ ಅಳಿಯನಿಗೆ ಪುರುಷತ್ವ ಇಲ್ಲ ಎಂದು ಅವನ ಮಗಳ ದೂರು ಬಂದದ್ದರಿಂದ ವಸೂಲಿ ಮಾಡಿದ್ದು ಇರುತ್ತದೆ. ಅಲ್ಲದೇ ತೆಗೂರಿನ ದ್ವಾರದ ಹೊರಗೆ ಮಾಂಸದ ಅಂಗಡಿ ಇಟ್ಟ ಬಗ್ಗೆ ಬಸಣ್ಣಾ ತೇಲಿ, ದೇವಣ್ಣಾ ಕುರುಬಗಟ್ಟಿ, ಅಪ್ಪಣ್ಣಾ ಮೆಣಸಿನಕಾಯಿ ಮತ್ತು ಲಖಮೋಜಿ ಗೌಳಿ ಇವರ ಕಡೆಯಿಂದ ವಸೂಲಾದದ್ದು, ಶುಕ್ರವಾರಪೇಟೆಯ ಮಲ್ಯಾ ಜಂಗಮ ಕಳುವು ಮಾಡಿದ ಬಗ್ಗೆ, ರಾಯಣ್ಣಾ ಕೋಷ್ಠಿ ವ್ಯಭಿಚಾರ ಮಾಡಿದ ಬಗ್ಗೆ ವಸೂಲಾದದ್ದು ಇರುತ್ತದೆ.

ಈಗ ಖರ್ಚಿನ ವಿವರಗಳನ್ನು ನೋಡೋಣ.

ಸುಭಾ ಕಡೆಯಿಂದ ಮುಂಗಡ ಹಣ ಪಡೆದದ್ದು ವಾಪಸ್ ಕೊಡಬೇಕಾದದ್ದು, ನರಸಪ್ಪಾ ನಾಯಿಕ ಬೆಟಗೇರಿಕರ ಇವರಿಗೆ ೨೫,೫೦೦-೦೦ (ರಸದ) ಮತ್ತು ಖಜಾನೆಯಿಂದ ನೀಡಬೇಕಾದದ್ದು ರೂ. ೧,೫೫೭-೧೧-೧ ಈ ಕೆಳಗಿನವರಿಗೆ—ಬಾಲಾಜಿ ಮೋಹಿತೆ ಹವಾಲದಾರ, ಸಿದೋಜಿ ಜಗಥಾಪ, ಕೆಲಗೇರಿಯ ಶ್ರೀರಂಗ ಬಾಪೂ, ಕಾರಕೂನರಿಗೆ ವೇತನ ಧಾರವಾಡದ ಕೋಟೆಗೆ ಸಂಬಂಧ ಪಟ್ಟಂತೆ ಖರ್ಚು ಇತ್ಯಾದಿ (ವರಾತ) ; ಎರಡನೆಯ ದಾಗಿ, ಮಹಾಲ ಮಜಕೂರ ಖರ್ಚು ಇದರಲ್ಲಿ ಅಧಿಕಾರಿ ವರ್ಗದವರಿಗೆ ವೇತನ ರೂ. ೫೩೦-೦-೦೦. ಉದಾ : ಉಡಪೀ ನರಸಿಂಗ ಕಮಾವಿಸದಾರ, ಎಸಾಜಿ ವಿಠ್ಠಲ ಮಜುಮದಾರ ಮತ್ತು ವೆಂಕಾಜಿ ಮಾಧವರಾವ ಇವರಿಗೆ ೫೭ ಸಿಬ್ಬಂದಿಗಳಿಗೆ ರೂ. ೨,೦೮೦-೦-೦. ಹೆಚ್ಚಿನ ಸಿಬ್ಬಂದಿವರ್ಗ ಹಿಡಿದು ರೂ. ೪,೬೧೮-೮-೦. ಇದರಲ್ಲಿ ಗ್ರಾಮ ಸೇವಕರಿಗೆ ಅಥವಾ ಪಾಲಕರಿಗೆ (ಸೀತ ಸನದಿ) ರೂ. ೧,೧೯೯-೧೨-೦ ವೇತನ ನೀಡಲಾಯಿತು.

ವೇತನದ ಹೊರತಾಗಿ ಉಳಿದ ಖರ್ಚಿಗೆ ಖೇರಿಜ ಮುಶಾಹಿರಾ ಎಂದು ಕರೆಯಲಾಗುತ್ತಿತ್ತು. ಅದು ರೂ. ೧,೧೪೩-೭-೧ ಇತ್ತು. ಇದರಲ್ಲಿ ಈ ಕೆಳಗಿನ ದೇವ ಸ್ಥಾನಗಳಿಗೆ ಖರ್ಚು ಮಾಡಲಾಯಿತು. ಮಂಗಳವಾರ ಪೇಟೆಯ ಶ್ರೀ ವೆಂಕಟೇಶ, ಉಳವಿಬಸಪ್ಪಾ ದುರ್ಗಾದೇವಿ, ಹಣಮಂತ ರವಿವಾರಪೇಟೆ, ಹೊಸಕಟ್ಟಿಯ ಸೋಮೇಶ್ವರ ದೇವಾಲಯ ಇತ್ಯಾದಿ ಬ್ರಾಹ್ಮಣರಿಗೆ ವರ್ಷಾಸನ ನೀಡಿದ್ದು ರಾಮದಾಸ ಬೈರಾಗಿ ಮತ್ತು ಬಾಲಂಭಟ್ಟ ಡೊಂಗರೆ ಇವರಿಗೆ, ಕಛೇರಿಯ ಖರ್ಚು ಅತಿಥಿಗಳ ಖರ್ಚು ಇತ್ಯಾದಿ ಇದರಲ್ಲಿ ಕೂಡಿರುತ್ತದೆ. ಇದರ ಹೊರತಾಗಿ ಮೋಕಾಶಿ ಮತ್ತು ರಾಜಮಂಡಳದ ಸದಸ್ಯರಿಗೆ ನೀಡುವ ವೇತನದ ವಿವರ ಇಲ್ಲಿ ಕೊಡಲಾಗಿದೆ. ಪರಶುರಾಮ ಬಲ್ಲಾಳ ಸುರಣೀಸ ೯೭-೮-೦, ರಾಣೋಜಿ ಸಲಗರ ೧೭೮೩-೧೦-೦. ರಾಣೋಜಿ ಸರ್ಜಾರಾವ ವಾಗಮೋಡೆ ೧,೯೫೨-೧೨-೦, ಗಿರಜೋಜಿ ನಲವಡೆ ೧೭೨-೮-೦, ಭಾಸ್ಕರರಾವ್ ದಾದಾಜಿ ನರಗುಂದಕರ ೪೫-೦-೦, ಮನೋಲಿ ಶಿಂಧೇ ೩೨೮-೨-೦, ಸಂತಾಜಿ ಜಗತಾಪ ೧,೩೫೩-೧೨-೦ ಒಟ್ಟು ೫,೭೩೩-೪-೦, ಕೊನೆಯದಾಗಿ ಚಾಲತೀ ವರ್ಷದ ಬಡ್ಡೀಹಣ ಕಂತಿನಲ್ಲಿ ನೀಡಿದ್ದು ಅಂದರೆ ೩೮,೬೯-೨-೦ ಸಾಲಾಬಾದಿ ಜಮಾ, ೨,೩೩೧-೦-೦ ಅಂತಸ್ತ, ೪,೧೯೫-೦-೦ ಹೆಚ್ಚಿನ ಬಡ್ಡಿ ೨,೦೦೧-೦-೦ ಅಂತಸ್ತ ಗೋವನಕೊಪ್ಪದ ಜಪ್ತಿ ಮತ್ತು ೪೫೧-೪-೦ ಮೊಕಾಸಿ ಹಣ. ಹೀಗೆ ಒಟ್ಟು ೪೭,೬೭೬-೬-೦. ಅದಲ್ಲದೇ ಬಟಾ ಖರ್ಚು ಅಂದರೆ ನಾಣ್ಯಗಳನ್ನು ಬದಲಾಯಿಸುವದಕ್ಕೆ ಕಮೀಷನ್ ಕೊಟ್ಟದ್ದು ರೂ. ೩೧,೮೪೯-೬-೩. ಹೀಗೆ ವರ್ಷದ ಒಟ್ಟು ಖರ್ಚಿನ ರಕಮು ೪೬,೮೬೪-೧೧-೨ ಮತ್ತು ಬಾಕಿ ೭,೩೯-೧-೦. ಇದರಲ್ಲಿ ಮಜಮು ಬಾಕಿ ರೂ. ೬,೧೬೩-೧೨-೦ ಮತ್ತು ಮುಲಕಿ ಬಾಕಿ ೧,೨೩೫-೫-೦. ಹೀಗೆ ಈ ತಾಳೇಬಂದ ಪೇಶ್ವೆಯರ ಕಾಲದ ಧಾರವಾಡದ ಆಡಳಿತ ಪದ್ಧತಿ, ಸಾಮಾಜಿಕ ಹಾಗೂ ಆರ್ಥಿಕ ಜೀವನದ ಮೇಲೆ ಬೆಳಕು ಚೆಲ್ಲುತ್ತದೆ.